ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ದೇವರಾಜು ಅರಸು ವಸತಿ ಯೋಜನೆಯಲ್ಲಿ ವಿಶೇಷ ವರ್ಗದ ಫಲಾನುಭವಿಗಳ ಕುರಿತು

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) -

102 (793) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ದೇವರಾಜು ಅರಸು ವಸತಿ ಯೋಜನೆಯಲ್ಲಿ ವಿಶೇಷ ವರ್ಗದ (ಅಂಗವಿಕಲರು, ಹೆಚ್.ಐ.ವಿ. ಸೋಂಕಿತರು, ದೇವದಾಸಿಗಳು, ತೃತೀಯ ಲಿಂಗಿಗಳು ಹಾಗೂ ಅಲೆಮಾರಿ) ಜನಾಂಗಕ್ಕೆ ಕಳೆದ 5 ವರ್ಷಗಳಲ್ಲಿ ಎಷ್ಟು ಫಲಾನುಭವಿಗಳಿಗೆ ವಸತಿ ಯೋಜನೆಯ ಸೌಲಭ್ಯವನ್ನು ನೀಡಲಾಗಿದೆ ;

(ಆ) ಫಲಾನುಭವಿಗಳಿಗೆ ಇಲ್ಲಿಯವರಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; ಬಿಡುಗಡೆ ಮಾಡಲು ಬಾಕಿ ಇರುವ ಅನುದಾನವೆಷ್ಟು ;

(ಇ) ಈ ಯೋಜನೆಯಲ್ಲಿ ಮಧ್ಯವರ್ತಿಗಳ ಹಾವಳಿ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಬಂದಿದ್ದಲ್ಲಿ, ಈ ಸಮಸ್ಯೆ ಪರಿಹಾರಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು ;

(ಉ) ಬಾಕಿ ಇರುವ ಅನುದಾನವನ್ನು ಬಿಡುಗಡೆ ಮಾಡುವುದು ಯಾವಾಗ ?